

# ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರ

# KARNATAKA SCOUT & GUIDE NEWS LETTER

VOL. I No. 2 SEPTEMBER 2000

## ರಾಜ್ಯ ಪರಿಷತ್ ಸಭೆ

ದಿನಾಂಕ 27.8.2000 ದಂದು ರಾಜ್ಯ ತರಬೇತಿ ಕೇಂದ್ರವಾದ ಬೆಸೆಂಟ್ ಪಾರ್ಕ್‌ನಲ್ಲಿ 82ನೇ ರಾಜ್ಯ ಪರಿಷತ್‌ನ ಸಾಮಾನ್ಯ ಸಭೆ ನಡೆಯಿತು. ಸಂಸ್ಥೆಯ ಅಧ್ಯಕ್ಷರಾದ ಶ್ರೀ ಜೆ.ಎಚ್. ಪಟೇಲ್‌ರವರ ಗೈರು ಹಾಜರಿಯಲ್ಲಿ ಹಿರಿಯ ಉಪಾಧ್ಯಕ್ಷರಾದ ಮೇಜರ್ ಎಂ.ಆರ್. ನಾರಾಯಣಸಿಂಗ್ ಅವರು ಅಧ್ಯಕ್ಷತೆ ವಹಿಸಿ ಸಭೆಯ ಕಾರ್ಯಕಲಾಪಗಳನ್ನು ನಡೆಸಿಕೊಟ್ಟರು. ಅನೇಕ ವಿಷಯಗಳ ಬಗ್ಗೆ ಚರ್ಚಿಸಿ ತೀರ್ಮಾನ ಕೈಗೊಳ್ಳಲಾಯಿತು. ರಾಜ್ಯ ವಾರ್ತಾ ಪತ್ರದ ಬಗ್ಗೆ ಸಭೆಯು ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸಿತು. ಈ ಸಭೆಗೆ 91 ರಾಜ್ಯ ಸದಸ್ಯರು ಭಾಗವಹಿಸಿದ್ದರು.



ಮೇಜರ್ ಎಂ.ಆರ್. ನಾರಾಯಣ ಸಿಂಗ್, ಉಪಾಧ್ಯಕ್ಷರು ರಾಜ್ಯ ಪರಿಷತ್ ಸಭೆಯಲ್ಲಿ ಮಾತನಾಡುತ್ತಿರುವುದು

ಈ ಸಭೆಯಲ್ಲಿ 1999-2000ಸಾಲಿನ ಅತ್ಯುತ್ತಮವಾಗಿ ಕೆಲಸ ಮಾಡುತ್ತಿರುವ ಜಿಲ್ಲಾ ಸಂಸ್ಥೆಗಳಿಗೆ ಫಲಕ ಮತ್ತು ಪ್ರಶಸ್ತಿಗಳನ್ನು ನೀಡಿ ಗೌರವಿಸಲಾಯಿತು.

### ರಾಜ್ಯ ಮಟ್ಟದ ಪ್ರಶಸ್ತಿಗಳು

1. ರಾಜ್ಯ ಮಟ್ಟದ ಅತ್ಯುತ್ತಮ ಪ್ರಶಸ್ತಿಯಾದ ಅಬ್ದುಲ್ ಗಫಾರ್



ರಾಜ್ಯ ಸಭೆಯಲ್ಲಿ ಭಾಗವಹಿಸಿರುವ ಸದಸ್ಯರುಗಳು

ಸ್ಮಾರಕ ಪರ್ಯಾಯ ಫಲಕವನ್ನು ದಕ್ಷಿಣ ಕನ್ನಡ ಜಿಲ್ಲೆಗೆ ನೀಡಲಾಯಿತು.

2. ರಾಜ್ಯ ಮಟ್ಟದ ಎರಡನೇ ಪ್ರಶಸ್ತಿಯಾದ ಜಸ್ಟೀಸ್ ಕೆ. ಶಂಕರನಾರಾಯಣರಾವ್ ಸ್ಮಾರಕ ಪರ್ಯಾಯ ಫಲಕವನ್ನು ಉಡುಪಿ ಜಿಲ್ಲೆ ಪಡೆಯಿತು.

3. ರಾಜ್ಯ ಮಟ್ಟದ ತೃತೀಯ ಪ್ರಶಸ್ತಿಯಾದ ಮೇಜರ್ ವೈ.ವಿ.ಕೆ ಮೂರ್ತಿ ಸ್ಮಾರಕ ಪರ್ಯಾಯ ಫಲಕವನ್ನು ಮೈಸೂರು ಗ್ರಾಮಾಂತರ ಜಿಲ್ಲೆಗೆ ನೀಡಲಾಯಿತು.

### ವಿಭಾಗ ಮಟ್ಟದ ಪ್ರಶಸ್ತಿಗಳು

ಬೆಂಗಳೂರು ವಿಭಾಗ ಮಟ್ಟದ ಶ್ರೀ ವಿ.ಪಿ. ದೀನದಯಾಳು ನಾಯ್ಡು ಸ್ಮಾರಕ ಪರ್ಯಾಯ ಫಲಕವನ್ನು ಬೆಂಗಳೂರು ದಕ್ಷಿಣ ಜಿಲ್ಲೆಗೂ ಮೈಸೂರು ವಿಭಾಗ ಮಟ್ಟದ ಶ್ರೀ ಜೆ.ಬಿ. ಮಲ್ಲಾರಾಧ್ಯ ಸ್ಮಾರಕ ಪರ್ಯಾಯ ಫಲಕವನ್ನು ಹಾಸನ ಜಿಲ್ಲೆಗೂ ಬೆಳಗಾವಿ ವಿಭಾಗ ಮಟ್ಟದ ಶ್ರೀ ಕೊಂಡಜ್ಜಿ ಬಸಪ್ಪ ಸ್ಮಾರಕ ಪರ್ಯಾಯ ಫಲಕವನ್ನು ಉತ್ತರ ಕನ್ನಡ ಜಿಲ್ಲೆಗೂ ಹಾಗು ಗುಲ್ಬರ್ಗ ವಿಭಾಗ ಮಟ್ಟದ ಪ್ರೊ. ಪಿ. ಶಿವಶಂಕರ್ ಸ್ಮಾರಕ ಪರ್ಯಾಯ ಫಲಕವನ್ನು ರಾಯಚೂರು ಜಿಲ್ಲೆಗೂ ನೀಡಲಾಯಿತು.



ರಾಜ್ಯ ಸಭೆಯಲ್ಲಿ ಭಾಗವಹಿಸಿರುವ ಸದಸ್ಯರುಗಳು



ರಾಜ್ಯ ಸಭೆಯಲ್ಲಿ ಭಾಗವಹಿಸಿರುವ ಸದಸ್ಯರುಗಳು

## ಸಹಾಯಕ ರಾಜ್ಯ ಸಂಘಟನಾ ಆಯುಕ್ತರುಗಳ ಸಭೆ

ದಿನಾಂಕ 27.8.2000ದಂದು ಸಂಜೆ 4.30ಕ್ಕೆ ಬೆಸೆಂಟ್ ಪಾರ್ಕ್‌ನಲ್ಲಿ ಸ್ಕೌಟ್ ಮತ್ತು ಗೈಡ್ ವಿಭಾಗಗಳ ಸಹಾಯಕ ರಾಜ್ಯ ಸಂಘಟನಾ ಆಯುಕ್ತರುಗಳ ಸಭೆ ನಡೆಯಿತು. ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪನವರು ಸಭೆಯ ಅಧ್ಯಕ್ಷತೆ ವಹಿಸಿದ್ದರು. ಸ್ಕೌಟಿಂಗ್ ಮತ್ತು ಗೈಡಿಂಗ್‌ನ ಗುಣ ಮಟ್ಟ ಹಾಗೂ ಗಣತಿ ಸುಧಾರಣೆಗೆ ಗಮನ ನೀಡುವಂತೆ ತಿಳಿವಳಿಕೆ ನೀಡಲಾಯಿತು. ಬೆಳಗಾಂನಲ್ಲಿ ನಡೆಯಲಿರುವ ರಾಜ್ಯ ಜಾಂಬೋರೇಟ್ ಬಗ್ಗೆ ಸಹ ಚರ್ಚಿಸಲಾಯಿತು. ಸಂಬಂಧಪಟ್ಟ ಜಿಲ್ಲೆಗಳು ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ತೊಡಗಿಸಿಕೊಳ್ಳುವಂತೆ ಅವರಿಗೆ ಸೂಚಿಸಲಾಯಿತು. ಈ ಸಭೆಯಲ್ಲಿ ರಾಜ್ಯ ಪದಾಧಿಕಾರಿಗಳೂ ಸಹ ಭಾಗವಹಿಸಿ ಸಲಹೆ ಸೂಚನೆಗಳನ್ನು ನೀಡಿದರು.



ಶ್ರೀ ವಿ.ಪಿ. ದೀನದಯಾಳುನಾಯ್ಡು ಸಮುದಾಯ ಭವನ ರಾಜ್ಯ ತರಬೇತಿ ಕೇಂದ್ರ ಬೆಸೆಂಟ್ ಪಾರ್ಕ್, ದೊಡ್ಡಬಳ್ಳಾಪುರ

*"A Scout is active in doing good not passive in Being good"*
- B.P

*There are two qualities in the world; efficiency and inefficiency and only two sort of people; the efficient and the inefficient*
- G. Bernard Shaw

# ರಾಜ್ಯ ವಾರ್ತೆಗಳು

### ಬೆಂಗಳೂರು ವಿಭಾಗ ಮಟ್ಟದ ಕ್ಷೇತ್ರಶಿಕ್ಷಣಾಧಿಕಾರಿಗಳ ಕಾರ್ಯಾಗಾರ

ಬೆಂಗಳೂರು ವಿಭಾಗ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ದಿನಾಂಕ 29.8.2000ದಂದು ಕ್ವೀನ್ಸ್ ರಸ್ತೆಯ ಕಮಲಾಬಾಯಿ ಬಾಲಕಿಯರ ಪ್ರೌಢಶಾಲೆಯ ಸಭಾಂಗಣದಲ್ಲಿ "ಶೈಕ್ಷಣಿಕ ಮತ್ತು ಆಡಳಿತಾತ್ಮಕ ಗುಣಮಟ್ಟ ಸುಧಾರಣೆ" ಕಾರ್ಯಾಗಾರ ನಡೆಯಿತು. ಈ ಕಾರ್ಯಾಗಾರದಲ್ಲಿ ಅಧಿಕಾರಿಗಳಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಬಗ್ಗೆ ವಿವರಣಾತ್ಮಕವಾಗಿ ಪರಿಚಯ ಮಾಡಿಕೊಡಲಾಯಿತು. ಶ್ರೀಮತಿ ರವಿವೆಸ್ಲಿ, ಸ್ಥಾನಿಕ ಆಯುಕ್ತರು (ಗೈಡ್ಸ್), ಹಾಗೂ ರಾಜ್ಯ ತರಬೇತಿ ಆಯುಕ್ತರುಗಳಾದ ಶ್ರೀ ನಾರಾಯಣಶೆಟ್ಟಿ ಮತ್ತು ಶ್ರೀಮತಿ ಜಾನಕಿ ವೇಣುಗೋಪಾಲ್ ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿದ್ದರು.

ಶ್ರೀಮತಿ ಶಾಂತಿಮತಿ, ಕಾರ್ಯದರ್ಶಿ ಹಾಗೂ ಪದ ನಿಮಿತ್ತ ಜಂಟಿ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ವಿಭಾಗ ಹಾಗೂ ಸಹಾಯಕ ರಾಜ್ಯ ಆಯುಕ್ತರು (ಗೈಡ್ಸ್) ಬೆಂಗಳೂರು ವಿಭಾಗ ಇವರು ಕಾರ್ಯಾಗಾರದ ನೇತೃತ್ವ ವಹಿಸಿದ್ದರು. ಈ ಕಾರ್ಯಾಗಾರದಲ್ಲಿ 65 ಕ್ಷೇತ್ರ ಶಿಕ್ಷಣಾಧಿಕಾರಿಗಳು ಮತ್ತು ವಿದ್ಯಾಧಿಕಾರಿಗಳು ಭಾಗವಹಿಸಿದ್ದರು. 'ಸ್ಕೌಟ್ ಮತ್ತು ಗೈಡ್ ಪರಿಚಯ' ಎಂಬ ಪುಸ್ತಕ ಮತ್ತು 'ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾಪತ್ರ'ವನ್ನು ಎಲ್ಲಾ ಅಧಿಕಾರಿಗಳಿಗೂ ಉಚಿತವಾಗಿ ನೀಡಲಾಯಿತು.

### ಉನ್ನತ ತರಬೇತಿ ಶಿಬಿರಗಳು

**ಕೊಂಡಜ್ಜಿ :** ದಿನಾಂಕ 16.8.2000ದಿಂದ 23.8.2000ದವರೆಗೆ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ

ಕೊಂಡಜ್ಜಿಯಲ್ಲಿ ರಾಜ್ಯ ಮಟ್ಟದ ಸ್ಕೌಟ್ ಮಾಸ್ಟರ್ ಮತ್ತು ಕಬ್ ಮಾಸ್ಟರ್‌ಗಳಿಗೆ ಉನ್ನತ ತರಬೇತಿ ಶಿಬಿರಗಳನ್ನು ನಡೆಸಲಾಯಿತು. ಈ ಶಿಬಿರಗಳಲ್ಲಿ 41 ಶಿಕ್ಷಕರು ಸ್ಕೌಟ್ ಶಿಕ್ಷಣಕ್ಕೂ, 21 ಶಿಕ್ಷಕರು ಕಬ್ ಶಿಕ್ಷಣಕ್ಕೂ ಭಾಗವಹಿಸಿದ್ದರು. ಶ್ರೀ ಜಿ.ಎಸ್. ಚಂದ್ರಪ್ರಕಾಶ್ ಶ್ರೀ ಟಿ. ಮಂಜುನಾಥ ಹಾಗೂ ಶ್ರೀ ಎಸ್.ಎಸ್. ಹುಸೇನಿ ಇವರುಗಳು ನಾಯಕರಾಗಿದ್ದರು.

ಶ್ರೀ ಮಹಮ್ಮದ್ ವಾಸಿಲ್, ಕೇಂದ್ರ ಸ್ಥಾನಿಕ ಆಯುಕ್ತರು (ಕಾರ್ಯಕ್ರಮ) ಶ್ರೀ ನಾರಾಯಣಶೆಟ್ಟಿ, ರಾಜ್ಯತರಬೇತಿ ಆಯುಕ್ತರು ಇವರು ಶಿಬಿರಗಳಿಗೆ ತಾಂತ್ರಿಕ ಸಲಹೆಗಾರರಾಗಿದ್ದರು.

***Many receive advice, only the wise profit by it***
**- SYRUS**

# ವೃಕ್ಷಮಣಿ ಧಾರಕರಿಗೆ ಸುಸ್ವಾಗತ ( 2000-2001 )

| | | |
|---|---|---|
| 1 | ಎಸ್.ಆರ್.ಜಿ ರೆಡ್ಡಿ | ಧಾರವಾಡ |
| 2. | ಬಿ.ಕೆ. ಮಠಪತಿ | ಧಾರವಾಡ |
| 3. | ಜಿ.ಎಂ. ಕತೀಬ್ | ಧಾರವಾಡ |
| 4. | ಆರ್.ಕೆ. ಹೊನ್ನಪ್ಪನವರ | ಧಾರವಾಡ |
| 5. | ಪಿ.ಜಿ. ಆರಾಧ್ಯ ಮಠ | ಧಾರವಾಡ |
| 6. | ಎಸ್.ಎಂ. ಮಡಿವಾಳರ | ಧಾರವಾಡ |
| 7. | ಶೇಖಸುರಣಗಿ | ಹಾವೇರಿ |
| 8. | ಪಿ.ಬಿ. ಮುದ್ದಿ | ಹಾವೇರಿ |
| 9. | ಎಸ್.ಎಂ. ಚಳ್ಳಗೇರಿ | ಹಾವೇರಿ |
| 10. | ಎಂ.ಕೆ. ಐಯ್ಯನ ಗೌಡರ್ | ಹಾವೇರಿ |
| 11. | ಬಿ.ವಿ. ಹೊರಪೇಟಿ | ಗದಗ |
| 12. | ಎಸ್.ಬಿ. ಕಿತ್ತೂರು | ಗದಗ |
| 13. | ಭಾಸ್ಕರ ಶೆಟ್ಟಿ | ದಕ್ಷಿಣ ಕನ್ನಡ |
| 14. | ಬಿ. ಶಂಕರ | ಕೊಪ್ಪಳ |
| 15. | ಮಹಾದೇವಿ | ದಾವಣಗೆರೆ |
| 16. | ಎನ್. ಯಶೋಧ | ದಾವಣಗೆರೆ |
| 17. | ಶಂಕರ್ ಎ.ಎಂ. | ಕೋಲಾರ |
| 18. | ವಿ.ಎಂ. ನಾರಾಯಣ ಸ್ವಾಮಿ | ಕೋಲಾರ ಉತ್ತರ |
| 19. | ರಾಮಣ್ಣ ಆರ್. | ತುಮಕೂರು |
| 20. | ನರಸಿಂಹರೆಡ್ಡಿ | ಕೋಲಾರ ಉತ್ತರ |
| 21. | ಧರಣೇಶ್ ಕುಮಾರ್ | ಮೈಸೂರು |
| 22. | ಸುರೇಶ ಹೆಬ್ರಿ | ದಕ್ಷಿಣ ಕನ್ನಡ |
| 23. | ನರೇಂದ್ರ ಕಾಮತ್ | ದಕ್ಷಿಣ ಕನ್ನಡ |
| 24. | ನವೀನ್ ಚಂದ್ರ | ದಕ್ಷಿಣ ಕನ್ನಡ |
| 25. | ಭಾಸ್ಕರ ಅದ್ವಾಲ | ದಕ್ಷಿಣ ಕನ್ನಡ |
| 26. | ಧರಣೇಂದ್ರ | ದಕ್ಷಿಣ ಕನ್ನಡ |
| 27. | ಶ್ರೀನಿವಾಸಗೌಡ | ಕೋಲಾರ ದಕ್ಷಿಣ |
| 28. | ಉದಯ ಕುಮಾರ್ | ಕೋಲಾರ ದಕ್ಷಿಣ |
| 29. | ಪರಮೇಶ್ವರ | ದಕ್ಷಿಣ ಕನ್ನಡ |
| 30. | ಜೆಸಿಂತಾ ಸೋಫಿಯಾ ಮಸ್ಕರೇನಸ್ | ದಕ್ಷಿಣ ಕನ್ನಡ |
| 31. | ಶಿವಾನಂದ | ದಕ್ಷಿಣ ಕನ್ನಡ |
| 32. | ಅನುಸೂಯಮ್ಮ | ತುಮಕೂರು |
| 33. | ಲಿಲ್ಲಿ ಮಾರ್ಗರೇಟ್ | ಮೈಸೂರು |
| 34. | ಸರಸ್ವತಿ ಸುರೇಸ್ | ಮೈಸೂರು |
| 35. | ಟಿ.ಎಸ್. ಮಂಜುಳ | ಮೈಸೂರು |
| 36. | ಮಹೇಂದ್ರ ಬಿ.ಎಂ. | ಮೈಸೂರು |
| 37. | ರವಿ ಕುಮಾರ್ | ಕೋಲಾರ ಉತ್ತರ |

## ರಾಷ್ಟ್ರಪತಿ ಪುರಸ್ಕಾರ ಪರೀಕ್ಷಾ ಶಿಬಿರ

**ಬೆಸೆಂಟ್ ಪಾರ್ಕ್ :** ದಿನಾಂಕ 18.8.2000 ದಿಂದ 22.8.2000ದವರೆಗೆ ಬೆಸೆಂಟ್ ಪಾರ್ಕ್‌ನಲ್ಲಿ 'ರಾಷ್ಟ್ರಪತಿ ಪುರಸ್ಕಾರ್' ಪರೀಕ್ಷಾ ಶಿಬಿರ ನಡೆಸಲಾಯಿತು. ಈ ಶಿಬಿರದಲ್ಲಿ 168 ಸ್ಕೌಟ್ಸ್ ಮಕ್ಕಳು ಭಾಗವಹಿಸಿದ್ದರು.

**ಕೊಂಡಜ್ಜಿ :** ಹಾಗೆಯೇ ದಿ. 24.8.2000 ದಿಂದ 28.8.2000ದವರೆಗೆ ಕೊಂಡಜ್ಜಿಯಲ್ಲಿಯೂ ಇದೇ ಶಿಬಿರ ನಡೆಸಲಾಯಿತು. ಇಲ್ಲಿ 275 ಸ್ಕೌಟ್ಸ್ ವಿದ್ಯಾರ್ಥಿಗಳು ಭಾಗವಹಿಸಿದ್ದರು.

ರಾಷ್ಟ್ರ ಸಂಸ್ಥೆಯ ಕ್ಷೇತ್ರ ಸಂಘಟನಾ ಆಯುಕ್ತರಾದ ಶ್ರೀ ಕೃಷ್ಣಸ್ವಾಮಿಯವರು ಈ ಶಿಬಿರಗಳ ನಾಯಕರಾಗಿದ್ದರು. ರಾಜ್ಯ ಸಂಸ್ಥೆಯ ಸಂಘಟನಾ ಆಯುಕ್ತರಾದ ಶ್ರೀ ಕೆ. ತಿಮ್ಮಪ್ಪನವರು ಸಂಯೋಜಕರಾಗಿ ಕಾರ್ಯನಿರ್ವಹಿಸಿದರು.

### ಸೂಚನೆ :

1. ಈ ವಾರ್ತಾ ಪತ್ರದ ಬಗ್ಗೆ ನಿಮ್ಮ ಸಲಹೆ, ಸೂಚನೆ ಮತ್ತು ಅಭಿಪ್ರಾಯಗಳನ್ನು ಸಂಕ್ಷಿಪ್ತವಾಗಿ ಬರೆದು ಕಳುಹಿಸಲು ಕೋರಿದೆ.
2. ಸ್ಕೌಟ್ ಮತ್ತು ಗೈಡ್‌ಗಳು, ಸ್ಕೌಟ್ ಶಿಕ್ಷಕ/ಶಿಕ್ಷಕಿಯರು ಲೇಖನ, ಚುಟುಕ ಹಾಗೂ ಹಾಡುಗಳನ್ನು ಬರೆದು ಕಳುಹಿಸಲು ಕೋರಿದೆ. ಸೂಕ್ತವಾದವುಗಳನ್ನು ಪ್ರಕಟಿಸಲಾಗುವುದು.

ವಿಳಾಸ : ಕೇಂದ್ರ ಸ್ಥಾನಿಕ ಆಯುಕ್ತರು
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕೇಂದ್ರ ಕಛೇರಿ
ಕೋಟೆ, ಬೆಂಗಳೂರು - 560002

# ಸ್ಕೌಟ್‌ಗಳ ಅನುಪಮ ಸೇವೆ

( ರೀಡರ್ಸ್ ಡೈಜೆಸ್ಟ್‌ನ ಮೇ 2000ದ ಸಂಚಿಕೆಯಿಂದ ಉದ್ಧೃತ )

ಸಂಗ್ರಹ : ✍ ಎನ್. ಶ್ರೀನಿವಾಸನ್
ಎಲ್.ಟಿ. (ಸ್ಕೌಟ್ಸ್)

ಸ್ಕೌಟ್ಸ್‌ಗಳ ಧ್ಯೇಯವಾಕ್ಯ "ಸದಾ ಸಿದ್ಧನಾಗಿರು"-

ಗುಡಾರವಾಸ, ಸ್ಕೌಟ್ ಕೌಶಲಗಳ ಕಲಿಕೆ, ಶಿಬಿರಾಗ್ನಿ, ಕವಾಯಿತು ಇತ್ಯಾದಿಗಳು ಒಂದು ಸಾಮಾನ್ಯ ಸ್ಕೌಟ್ ಶಿಬಿರದ ಕಾರ್ಯಕ್ರಮಗಳು. ಆದರೆ ಸ್ಕೌಟ್‌ಗಳು ಇದಕ್ಕಿಂತ ವಿನೂತನವಾದುದನ್ನು ತಮ್ಮ ವಾರ್ಷಿಕ ಶಿಬಿರದಲ್ಲಿ ಮಾಡಬಲ್ಲರೆಂಬುದನ್ನು ಇಂಗ್ಲೆಂಡಿನ ಸ್ಕೌಟ್‌ಗಳು ತೋರಿಸಿಕೊಟ್ಟಿದ್ದಾರೆ.

ಲಂಡನ್ನಿನ, 64 ವರ್ಷದ ರಾಯ್ ಹೂಗೇಟ್ ಮತ್ತು 23 ವರ್ಷದ ಚಾನ್‌ಲೀ ಎಂಬ ಸ್ಕೌಟ್ ಮಾಸ್ಟರುಗಳು ತಮ್ಮ ಸ್ಕೌಟ್ ತಂಡದ ವಾರ್ಷಿಕ ಶಿಬಿರಕ್ಕಾಗಿ ಸೂಕ್ತ ಸ್ಥಳಕ್ಕಾಗಿ ಹುಡುಕಾಟ ನಡೆಸುತ್ತಿದ್ದಾಗ ಸ್ಥಳೀಯ ಜಮೀನ್ದಾರನೊಬ್ಬ, ಬೆಟ್ಟದ ತಪ್ಪಲಿನ "ಮೋಹಾಕ್" ಎಂಬ ಸುಂದರ ತಾಣವೊಂದನ್ನು ಇವರಿಗೆ ನೀಡಿದನು. ಇದು 1970ರ ಸುಮಾರಿನಲ್ಲಿ ನಡೆದ ಸಂಗತಿ.

ಆ ಸ್ಥಳದಲ್ಲಿ ತಮ್ಮ ವಾರ್ಷಿಕ ಬೇಸಿಗೆ ಶಿಬಿರವನ್ನು ಮಜವಾಗಿ ಕಳೆಯುತ್ತಿದ್ದಾಗ, ಒಮ್ಮೆ ಒಬ್ಬ ವ್ಯಕ್ತಿಯು, ತನ್ನ ಅಂಗವಿಕಲ ಮಗನನ್ನು ಇತರ ಕೆಲವು ಅಂಗವಿಕಲ ಮಕ್ಕಳೊಂದಿಗೆ ತಮ್ಮ ಅತಿಥಿಗಳಾಗಿ ಸೇರಿಸಿಕೊಳ್ಳುವಿರಾ ಎನ್ನಲು ಆ ಶಿಬಿರದ ನಾಯಕನು ಸ್ವಲ್ಪವೂ ತಡಮಾಡದೆ ಸಂತೋಷದಿಂದ ಒಪ್ಪಿಕೊಂಡರು.

ಆ ವರ್ಷದಿಂದ ಪ್ರತಿ ವರ್ಷವೂ ನೂರಾರು ಮಕ್ಕಳು ಈ ಶಿಬಿರದಲ್ಲಿ ಅತಿಥಿಗಳಾಗಿ ಬರುತ್ತಾರೆ. ಇವರಲ್ಲಿ ಹೆಚ್ಚಾಗಿ ಬುದ್ಧಿಮಾಂದ್ಯ ಹಾಗೂ ನರದೌರ್ಬಲ್ಯದ ಮಕ್ಕಳು ಇರುತ್ತಾರೆ. ತಂದೆ ತಾಯಿಗಳು ಮಕ್ಕಳನ್ನು ಕರೆತಂದು ಈ ಶಿಬಿರದಲ್ಲಿ ಬಿಡುತ್ತಾರೆ. ಆ ಮಕ್ಕಳಿಗೆ ಅತಿ ಅವಶ್ಯವಾಗಿ ಬೇಕಾದ ಪ್ರೀತಿ ವಾತ್ಸಲ್ಯಗಳನ್ನು ಈ ಸ್ಕೌಟ್ಸ್‌ಗಳು ನೀಡುತ್ತಾರೆ. ಅವರ ಒದ್ದೆಯಾದ ಚಡ್ಡಿಗಳನ್ನು ಬೇಸರವಿಲ್ಲದೆ ಬದಲಾಯಿಸುತ್ತಾರೆ. ಸ್ನಾನ ಮಾಡಿಸುತ್ತಾರೆ. ಊಟ ತಿನ್ನಿಸುತ್ತಾರೆ. ಆನಂದಿಸುತ್ತಾರೆ. ಆ ಮಕ್ಕಳು ಕೆಲವು ಸಲ ಅತಿ ಒರಟಾಗಿ ವರ್ತಿಸುವುದುಂಟು. ಗುದ್ದುವುದು, ಒದೆಯುವುದು, ಕಚ್ಚುವುದು, ಕಿರುಚುವುದು ಇತ್ಯಾದಿ. ಇದೆಲ್ಲವನ್ನು ಅತಿ ತಾಳ್ಮೆಯಿಂದ ಹಸನ್ಮುಖಿಗಳಾಗಿ ಸಹಿಸಿಕೊಂಡು ಅವರ ಸೇವೆ ಮಾಡುತ್ತಾರೆ.

ಪ್ರತಿಯೊಂದು ಮಗುವಿಗೂ ಇಬ್ಬರು ಸುಧಾರಕರು ಇರುತ್ತಾರೆ. ಹಿರಿಯ ಸ್ಕೌಟ್ (12-14ವರ್ಷ) ಪಾಲಕ ಮತ್ತು ಕಿರಿಯ ಸ್ಕೌಟ್ ಸಹಾಯಕ ಇವರೀರ್ವರ ಪಾಲನೆಯಲ್ಲಿ ಆ ಮಕ್ಕಳು ಆನಂದ ಪಡೆಯುತ್ತಾರೆ. ಹಾಗೂ ಅವರಲ್ಲಿ ಸಾಕಷ್ಟು ಸುಧಾರಣೆ ಸಹ ಕಂಡುಬರುತ್ತದೆ. 14 ವರ್ಷದ ಒಬ್ಬ ಸ್ಕೌಟ್ ಹೀಗೆ ಹೇಳುತ್ತಾನೆ "ಅವರು ಸುಧಾರಿಸಿದಾಗ ಬಹಳ ಖುಷಿ ಎನಿಸುತ್ತದೆ."

ಇತ್ತೀಚಿನ ವರ್ಷಗಳಲ್ಲಿ, ದಾನಿಗಳಿಂದ ಹಣ ಸಂಗ್ರಹಿಸಿ 12 ಹಾಸಿಗೆಗಳ ಆಸ್ಪತ್ರೆಯೊಂದನ್ನು ಸ್ಕೌಟ್ ಬಾಲಕರು ಕಟ್ಟಿದ್ದಾರೆ. ನರದೌರ್ಬಲ್ಯದ ಮಕ್ಕಳಿಗಾಗಿ ಆಧುನಿಕ ಉಪಕರಣಗಳನ್ನು ಹೊಂದಿಸಿಕೊಂಡಿದ್ದಾರೆ. ಈ ಶಿಬಿರದಲ್ಲಿ ಕಸ ಗುಡಿಸುವುದು ಅಡಿಗೆ ಮಾಡುವುದು ಮುಂತಾದ ಎಲ್ಲಾ ಕಾರ್ಯಗಳನ್ನೂ ಸ್ಕೌಟುಗಳೇ ಮಾಡುತ್ತಾರೆ.

ಈ ರೀತಿಯ ವಿಶಿಷ್ಟ ಶಿಬಿರವನ್ನು ಪ್ರತಿ ವರ್ಷ ಬೇಸಿಗೆಯಲ್ಲಿ ಸುಮಾರು 6 ವಾರಗಳ ಕಾಲ ಈ ಸ್ಕೌಟ್‌ಗಳು ನಡೆಸುತ್ತಿದ್ದಾರೆ. ರಜಾ ದಿನಗಳ ಮಜವನ್ನು ಸೇವೆ ಮಾಡುವುದರ ಮೂಲಕ ಪಡೆಯುತ್ತಿದ್ದಾರೆ. ಈ ಸ್ಕೌಟುಗಳೇನೂ ಶ್ರೀಮಂತ ವರ್ಗದವರಿಂದ ಬಂದವರಲ್ಲ, ಒಂದು ಕೊಳೆಗೇರಿಯ ಕಡು ಬಡತನದ, ಅಷ್ಟೇನೂ ಹೆಚ್ಚಿನ ವಿದ್ಯಾಭ್ಯಾಸವಿಲ್ಲದ ಕುಟುಂಬದಿಂದ ಬಂದವರು. ಆದರೆ ಸ್ಕೌಟ್ ಮನೋಭಾವ (Scout Spirit)ದ ಎದುರು ಇದಾವುದೂ ನಿಲ್ಲಲಿಲ್ಲ. ಇದಲ್ಲವೇ ನಿಜವಾದ ಸ್ಕೌಟಿಂಗ್!!!

**GREAT *PEOPLE TALK ABOUT* IDEAS**
**AVERAGE *PEOPLE TALK ABOUT* THINGS**
**SMALL *PEOPLE TALK ABOUT* OTHER PEOPLE**

# ಜಿಲ್ಲಾ ವಾರ್ತೆಗಳು

## ಬೆಂಗಳೂರು ಗ್ರಾಮಾಂತರ ಜಿಲ್ಲೆ

### ನೇತಾಜಿ ಸ್ವತಂತ್ರ ಸ್ಕೌಟ್ಸ್ ದಳದ ಉದ್ಘಾಟನೆ

ಮಾದಗೊಂಡನಹಳ್ಳಿ, ಮಾಗಡಿ ತಾಲ್ಲೂಕು ಇಲ್ಲಿ ನೇತಾಜಿ ಸ್ವತಂತ್ರ ಸ್ಕೌಟ್ ದಳದ ಉದ್ಘಾಟನೆಯನ್ನು ತಾ॥ 17.9.2000 ದಂದು, ಮಾದಗೊಂಡನಹಳ್ಳಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಆವರಣದಲ್ಲಿ ಶ್ರೀ ಚನ್ನಪ್ಪನವರು, ಅಧ್ಯಕ್ಷರು ಮಾದಗೊಂಡನಹಳ್ಳಿ ಗ್ರಾಮ ಪಂಚಾಯತಿ ಇವರು ನೆರವೇರಿಸಿದರು. ಶ್ರೀ ಹೆಚ್.ಸಿ. ಬಾಲಕೃಷ್ಣ, ಮಾಜಿಶಾಸಕರು, ಮಾಗಡಿ, ಇವರು ಬಹುಮಾನ ವಿತರಣೆ ಮಾಡಿ ಮಕ್ಕಳಿಗೆ ಪ್ರೋತ್ಸಾಹದ ನುಡಿಗಳನ್ನು ಹೇಳಿದರು.

ಸಮಾರಂಭದಲ್ಲಿ ಶ್ರೀ ಎಂ.ಎ. ಚೆಲ್ಲಯ್ಯ, ಕೇಂದ್ರ ಕಛೇರಿ ಆಯುಕ್ತರು, ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಹಾಗೂ ಶ್ರೀ ಎನ್. ಶ್ರೀನಿವಾಸನ್, ಎಲ್.ಟಿ. (ಸ್ಕೌಟ್ಸ್) ಉಪನ್ಯಾಸಕರು (ಡಯಟ್ಸ್) ಹಾಗು ಎಂ.ಎಲ್. ರಾಮಚಂದ್ರಯ್ಯ, ಅಧ್ಯಕ್ಷರು, ನೇತಾಜಿ ಸ್ಕೌಟ್ ದಳ ಇವರುಗಳ ಉಪಸ್ಥಿತರಿದ್ದರು. ಸ್ಥಳೀಯ ಯುವಕ ಮಂಡಲಿಯ ಸದಸ್ಯರು ಹಾಗೂ ಶಾಲಾ ಮಕ್ಕಳು, ಗ್ರಾಮಸ್ಥರು ಸಮಾರಂಭದಲ್ಲಿ ಭಾಗವಹಿಸಿದ್ದರು.

ಜಿಲ್ಲಾ ಶಿಕ್ಷಣ ಮತ್ತು ತರಬೇತಿ ಸಂಸ್ಥೆ ಬೆಂಗಳೂರು ಗ್ರಾಮಾಂತರ ಟಿ.ಸಿ.ಹೆಚ್ ವಿದ್ಯಾರ್ಥಿಗಳಿಗೆ ನಡೆಸಿದ ಸ್ಕೌಟ್ ಮಾಸ್ಟರ್‌ಗಳ ಮೂಲ ತರಬೇತಿ ಶಿಬಿರದಲ್ಲಿ ಪಾಲ್ಗೊಂಡ ಶ್ರೀ ಕೆಂಚಯ್ಯ ಅವರು ಈ ಸ್ವತಂತ್ರ ಸ್ಕೌಟ್ ದಳವನ್ನು ಆರಂಬಿಸಿರುತ್ತಾರೆ.

## ಬೆಂಗಳೂರು ದಕ್ಷಿಣ ಜಿಲ್ಲೆ

ಆನೇಕಲ್ಲು ತಾಲ್ಲೂಕಿನ ರವಿಸುತ ಭಜನಾ ಮಂದಿರದ ಉದ್ಘಾಟನೆಗಾಗಿ ತಾ॥ 6.9.2000 ದಂದು ಆಗಮಿಸಿದ ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಪದ್ಮಭೂಷಣ ಡಾ॥ ಡಿ. ವೀರೇಂದ್ರ ಹೆಗ್ಗಡೆಯವರನ್ನು ಸ್ಥಳೀಯರೊಂದಿಗೆ ಆನೇಕಲ್ ಸ್ಥಳೀಯ ಸಂಸ್ಥೆಯ 120 ಸ್ಕೌಟ್ಸ್, ಗೈಡ್ಸ್, ರೋವರ್ಸ್, ರೇಂಜರ್ಸ್‌ಗಳು ಬರಮಾಡಿಕೊಂಡರು. ಸ್ಥಳೀಯ ಸಂಸ್ಥೆಯ ವತಿಯಿಂದ ಕಾರ್ಯದರ್ಶಿ ಎ.ಎನ್. ನರೇಂದ್ರ ಕುಮಾರ್ ಹೂಗುಚ್ಛ ನೀಡಿ ಡಾ॥ ವೀರೇಂದ್ರ ಹೆಗ್ಗಡೆಯವರನ್ನು ಸ್ವಾಗತಿಸಿದರು. ಸಮಾರಂಭದಲ್ಲಿ ಶಾಸಕ ವಿ. ನಾರಾಯಣಸ್ವಾಮಿ, ಜಿಲ್ಲಾ ಪಂಚಾಯಿತ್ತಿ ಅಧ್ಯಕ್ಷ ಎಚ್.ಎಸ್. ಬಸವರಾಜು, ತಾಲ್ಲೂಕು ಪಂಚಾಯಿತ್ತಿ ಅಧ್ಯಕ್ಷ ಶ್ರೀ ಕೆ.ಸಿ. ರಾಮಚಂದ್ರ, ಪುರಸಭಾಧ್ಯಕ್ಷ ಸತ್ಯೇಂದ್ರ ಕುಮಾರ್, ತಹಸೀಲ್ದಾರ್ ವೈ. ಕಾಳಿರಾಜು ಮುಂತಾದವರು ಉಪಸ್ಥಿತರಿದ್ದರು.



ಪದ್ಮಭೂಷಣ ಶ್ರೀ ಡಿ. ವೀರೇಂದ್ರ ಹೆಗ್ಗಡೆಯವರಿಗೆ ಸ್ವಾಗತ

### ಸರ್ವಧರ್ಮ ಪ್ರಾರ್ಥನೆ

ವಿಮಾನಪುರ ಸ್ಥಳೀಯ ಸಂಸ್ಥೆ ಹಾಗೂ ಹಿಂದೂಸ್ತಾನ್ ಏರೋನಾಟಿಕ್ಸ್ ಟೌನ್ ಶಿಪ್ ಎಜುಕೇಷನ್ ಕಮಿಟಿ, ಇವರುಗಳ ಸಂಯುಕ್ತ ಆಶ್ರಯದಲ್ಲಿ ದಿನಾಂಕ 26.8.2000ದಂದು ವಿಮಾನಪುರ ಪ್ರೌಢಶಾಲೆಯಲ್ಲಿ ಲೋಕ ಶಾಂತಿಗಾಗಿ ಸರ್ವಧರ್ಮ ಪ್ರಾರ್ಥನೆ ಏರ್ಪಡಿಸಲಾಗಿತ್ತು. ವಿವಿಧ ಧರ್ಮಗಳ ಅನುಯಾಯಿಗಳು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಹೆಚ್.ಎ.ಎಲ್.ನ ವ್ಯವಸ್ಥಾಪಕ ನಿರ್ವಾಹಕರು ಸಹ ಇದರಲ್ಲಿ ಉಪಸ್ಥಿತರಿದ್ದರು. ಸಮಿತಿಯ ಕಾರ್ಯದರ್ಶಿಗಳಾದ ಶ್ರೀ ಪಿ.ಡಿ. ದಿವಾಕರರವರು ಈ ಕಾರ್ಯಕ್ರಮವನ್ನು ಸಂಘಟಿಸಿದರು. ಸುಮಾರು 500 ಮಂದಿ ಮಕ್ಕಳು ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

## ಮಂಡ್ಯ ಜಿಲ್ಲೆ

ಮಂಡ್ಯ ಜಿಲ್ಲೆಯ ಜೈಹಿಂದ್ ಸ್ವತಂತ್ರ ಸ್ಕೌಟ್ ದಳದಿಂದ ದಿ. 6.8.2000ದಂದು ಪರಿಸರ ಜಾಗೃತಿ ಅರಿವು ಮೂಡಿಸುವ ಸಲುವಾಗಿ 6 ಮಂದಿ ರೋವರ್ ಹಾಗು 6 ಮಂದಿ ಸ್ಕೌಟ್ ವಿದ್ಯಾರ್ಥಿಗಳ ಹೊರ ಸಂಚಾರವನ್ನು ಏರ್ಪಡಿಸಿದ್ದರು. ಮಂಡ್ಯದಿಂದ 17 ಕಿ.ಮೀ. ದೂರದಲ್ಲಿನ ಅರಕೆರೆ ಎಂಬ ಗ್ರಾಮಕ್ಕೆ ಸೈಕಲ್‌ನಲ್ಲಿ ಪರಿಸರದ



ಜೈ ಹಿಂದ್ ಸ್ವತಂತ್ರ ರೋವರ್ಸ್ ತಂಡದವರ ಸೈಕಲ್ ಪ್ರಯಾಣ

ಬಗೆಗಿನ ಘೋಷಣೆಗಳೊಂದಿಗೆ ಹೊರ ಸಂಚಾರ ಹೊರಟ ಇವರು ಅರಕೆರೆ ಗ್ರಾಮದಲ್ಲಿ ಗುಡಾರಗಳನ್ನು ನಿರ್ಮಿಸಿ ಅಲ್ಲಿನ ಜನರಿಗೆ ಸ್ಕೌಟ್ ಚಟುವಟಿಕೆಗಳು ಮತ್ತು ಪರಿಸರದ ಬಗ್ಗೆ ತಿಳಿಸಿಕೊಟ್ಟು ಪರಿಸರದ ಬಗ್ಗೆ ಕಾಳಜಿ ವಹಿಸುವಂತೆ ಪ್ರೋತ್ಸಾಹಿಸಿದರು. ಈ ತಂಡವನ್ನು ಎನ್. ಆಶೋಕ ಕುಮಾರ ನಾಯಕತ್ವದಲ್ಲಿ ಮುನ್ನಡೆಸಲಾಗಿದೆ.

## ಗುಲ್ಬರ್ಗಾ ಜಿಲ್ಲೆ

ಗುಲ್ಬರ್ಗಾ ಜಿಲ್ಲಾ ಸಂಸ್ಥೆಯ ಆಶ್ರಯದಲ್ಲಿ ದಿನಾಂಕ 30.8.2000 ದಿಂದ 8.9.2000 ವರೆಗೆ ಪಟ್ಟಣ ಜವಳಿ ರೆಸಿಡೆನ್ಸಿಯಲ್ ಶಾಲೆ ಆವರಣದಲ್ಲಿ ಬೇಸಿಕ್ ಸ್ಕೌಟ್ ಮಾಸ್ಟರ್ ಹಾಗೂ ಕಬ್ ಮಾಸ್ಟರ್‌ಗಳ ತರಬೇತಿ ಶಿಬಿರ ನಡೆಯಿತು. ಶ್ರೀ ನಾರಾಯಣ ಶೆಟ್ಟಿ, ಎಲ್.ಟಿ(ಎಸ್) ರಾಜ್ಯ ತರಬೇತಿ ಆಯುಕ್ತರು ಶ್ರೀಮತಿ ಜೂಲಿಯನಾ ಲಸರಾಡೋ ಎ.ಎಲ್.ಟಿ(ಸಿ) ನಾಯಕರಾಗಿದ್ದರು. 23 ಸ್ಕೌಟ್ ಮಾಸ್ಟರ್ಸ್ 13 ಕಬ್ಸ್ ಮಾಸ್ಟರ್‌ಗಳು ಭಾಗವಹಿಸಿದ್ದರು. ಶ್ರೀ ಹೆರೂರ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಶ್ರೀಮತಿ ಪದ್ಮಪ್ರಿಯ, ಜಿಲ್ಲಾ ಆಯುಕ್ತರು (ಗೈಡ್ಸ್) ಶ್ರೀ ಅಡಿವೆಪ್ಪ ಚಿಂಚೋಳಿ, ಉಪ ನಿರ್ದೇಶಕರು. ಪದವಿಪೂರ್ವ ಮಂಡಳಿ, ಶ್ರೀ ಸಿ. ಆರ್. ಬಾಡಾ, ಪ್ರಾಚಾರ್ಯರು ಇವರುಗಳು ಶಿಬಿರಕ್ಕೆ ಭೇಟಿ ನೀಡಿದ್ದರು. ಶ್ರೀ ಮಹಾದೇವಪ್ಪ, ಜಿಲ್ಲಾ ಕಾರ್ಯದರ್ಶಿ ಹಾಗೂ ಶಿಕ್ಷಣಾಧಿಕಾರಿಗಳು ಸಮಾರೋಪ ಸಮಾರಂಭದ ಅಧ್ಯಕ್ಷತೆ ವಹಿಸಿದ್ದರು. ಜವಳಿ ಶಾಲೆಯ ಪ್ರಾಚಾರ್ಯರು ಮುಖ್ಯ ಅತಿಥಿಗಳಾಗಿದ್ದರು. ಕೊನೆಯಲ್ಲಿ ಶ್ರೀ ನಾಗೇಶ್ ಆರ್. ಶಿವಪುರ, ರಾಜ್ಯ ಸಹಾಯಕ ಸಂಘಟನಾ ಆಯುಕ್ತರು (ಸ್ಕೌಟ್ಸ್) ವಂದಿಸಿದರು.

## ರಾಜ್ಯ ಮಟ್ಟದ ಶಿಕ್ಷಕರ ದಿನಾಚರಣೆ

ದಿನಾಂಕ 6.9.2000ರಂದು ಗುಲ್ಬರ್ಗಾದಲ್ಲಿ (ಕರ್ನಾಟಕ ಸರ್ಕಾರದ ವತಿಯಿಂದ) ರಾಜ್ಯಮಟ್ಟದ ಶಿಕ್ಷಕರ ದಿನಾಚರಣೆ ನಡೆಯಿತು. ಈ ಸಂದರ್ಭದಲ್ಲಿ ನಗರದಲ್ಲಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಹಾಗೂ ಸ್ಕೌಟ್ಸ್ ಶಿಕ್ಷಕರು ಈ ಕಾರ್ಯಕ್ರಮದಲ್ಲಿ ಸ್ವಯಂಸೇವಕರಾಗಿ ಸೇವೆಸಲ್ಲಿಸಿದರು.

ಕರ್ನಾಟಕ ರಾಜ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಮಾನ್ಯ ಶ್ರೀ ಎಚ್. ವಿಶ್ವನಾಥರವರು ಮುಖ್ಯ ಅತಿಥಿಗಳಾಗಿ ಆಗಮಿಸಿ ಶಿಕ್ಷಕರಿಗೆ ರಾಜ್ಯಮಟ್ಟದ ಪ್ರಶಸ್ತಿ ನೀಡಿ ಸನ್ಮಾನಿಸಿದರು. ಮಾನ್ಯ ಸಚಿವರಿಗೆ ಸ್ಕೌಟ್ಸ್ ಗೈಡ್ಸ್ ವಿದ್ಯಾರ್ಥಿಗಳಿಂದ ಸ್ವಾಗತ ನೀಡಲಾಯಿತು.

## ರಾಯಚೂರು ಜಿಲ್ಲೆ

ದಿನಾಂಕ 20.8.2000ದಂದು ರಾಜೀವಗಾಂಧಿಯವರ ಜಯಂತಿಯನ್ನು ಸದ್ಭಾವನಾ ದಿನವನ್ನಾಗಿ ಆಚರಿಸಲಾಯಿತು. ಇನ್‌ಫ್ಯಾಂಟ್ ಜೀಸಸ್ ಶಾಲೆಯಲ್ಲಿ ನಡೆದ ಈ ಸಮಾರಂಭವನ್ನು ಶ್ರೀ ಬೋಸರಾಜು, ಶಾಸಕರು ಹಾಗೂ ಅಧ್ಯಕ್ಷರು ಹೈ.ಕ. ಪ್ರ. ಅ. ಮಂಡಳಿ ಇವರು ಉದ್ಘಾಟಿಸಿದರು. ಫಾದರ್ ಭಗವಂತರಾಜ್, ಪ್ರಾಚಾರ್ಯರು ಇನ್‌ಫ್ಯಾಂಟ್ ಜೀಸಸ್ ಶಾಲೆ ಶ್ರೀ ಕೆ. ಶಾಂತಪ್ಪ, ಅಧ್ಯಕ್ಷರು, ಎ.ಪಿ.ಎಂ.ಸಿ. ಶ್ರೀ ಎನ್. ನಂಜಪ್ಪ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀಮತಿ ಅನ್ನಪೂರ್ಣಾ ದೇವಿ, ಶಿಕ್ಷಣಾಧಿಕಾರಿ ಇವರು ಈ ಸಮಾರಂಭದಲ್ಲಿ ಭಾಗವಹಿಸಿದ್ದರು. ಸುಮಾರು 40 ಮಂದಿ ಸ್ಕೌಟ್ಸ್ ಗೈಡ್ಸ್-ಮಕ್ಕಳು ಭಾಗವಹಿಸಿದ್ದರು. ಜಿಲ್ಲಾ ಆಯುಕ್ತ, ಶ್ರೀ ಕೆ. ತಿಮ್ಮಯ್ಯನವರು ಸ್ವಾಗತಿಸಿದರು. ಜಿಲ್ಲಾ ಕಾರ್ಯದರ್ಶಿ ಆರ್. ನರಸಿಂಹಮೂರ್ತಿಯವರು ವಂದಿಸಿದರು.



ಶಿಕ್ಷಕರ ದಿನಾಚರಣೆಯಲ್ಲಿ ಭಾಗವಹಿಸಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು.

### ಶಿಕ್ಷಕರ ದಿನಾಚರಣೆ

ದಿ 5.9.2000ದಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ರಾಯಚೂರು ಇವರು ಶಿಕ್ಷಕ ದಿನಾಚರಣೆಯನ್ನು ಏರ್ಪಡಿಸಿದ್ದರು. ಸಮಾರಂಭದಲ್ಲಿ ಬಾಗವಹಿಸಿದ್ದ ಜಿಲ್ಲಾ ಪಂಚಾಯತ್ ಅಧ್ಯಕ್ಷೆ ಶ್ರೀಮತಿ ಕೆ. ಸರಸ್ವತಿ ಅವರು ಶಿಕ್ಷಕರನ್ನು ಉದ್ದೇಶಿಸಿ ಮಾತನಾಡಿ ಶಿಕ್ಷಕರ ಜವಾಬ್ದಾರಿ ಮತ್ತು ಕರ್ತವ್ಯಗಳೇನೆಂದು ತಿಳಿಸಿದರು. ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀ ಡಿ.ಎಂ. ಮಂಟೂರ್ ಅವರೂ ಸಮಾರಂಭದಲ್ಲಿ ಭಾಗವಹಿಸಿದ್ದು, ಶಿಕ್ಷಕರ ಜವಾಬ್ದಾರಿ ಮತ್ತು ಶಿಕ್ಷಣ ಇಲಾಖೆಯ ವೈಶಿಷ್ಟ್ಯತೆಯನ್ನು ಕುರಿತು ಹೇಳಿದರು. ಶಿಕ್ಷಕರು ಅತ್ಯಂತ ಜವಾಬ್ದಾರಿಯುತವಾಗಿ ನಡೆದುಕೊಂಡಾಗ ಮಾತ್ರ ಸಮಾಜ ಅವರನ್ನು ಗುರುತಿಸುತ್ತದೆ ಎಂದರು. ರಾಜ್ಯ ಸಂಸ್ಥೆಯ ಜಂಟಿ ಕಾರ್ಯದರ್ಶಿಗಳಾದ ಶ್ರೀ ಚಿನ್ನಸ್ವಾಮಿ ರೆಡ್ಡಿಯವರು ಈ ಸಮಾರಂಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಉದ್ದೇಶ, ನೀತಿ ನಿಯಮಗಳನ್ನು ಕುರಿತು ತಿಳಿಸಿದರು.

ಈ ಸಮಾರಂಭದಲ್ಲಿ ಶಿಕ್ಷಣ ಕ್ಷೇತ್ರಕ್ಕೆ ಗಣನೀಯ ಸೇವೆ ಸಲ್ಲಿಸಿ ನಿವೃತ್ತರಾದವರಿಗೆ ಸನ್ಮಾನಿಸಲಾಯಿತು. ಈ ಶಿಕ್ಷಕರ ದಿನಾಚರಣೆಯಲ್ಲಿ ಉಪನ್ಯಾಸಕರು, ಶಿಕ್ಷಕರು ಮತ್ತು ಸ್ಕೌಟ್ಸ್ : ಗೈಡ್ಸ್ ಮಕ್ಕಳು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿದ್ದರು.

## ಕೊಡಗು ಜಿಲ್ಲೆ

ದಿನಾಂಕ 24.8.2000 ದಂದು, ಸ್ಕೌಟ್-ಗೈಡ್ ಭವನದಲ್ಲಿ ಸ್ಕೌಟ್ ಶಿಕ್ಷಕ ಮತ್ತು ಗೈಡ್ ಶಿಕ್ಷಕಿಯರ ಸಭೆ ನಡೆಯಿತು. ಇದರಲ್ಲಿ 45 ಮಂದಿ ಭಾಗವಹಿಸಿದ್ದರು. ಶ್ರೀ ಕೆ.ಎ. ಸೋಮಣ್ಣ, ಸಹಾಯಕ ರಾಜ್ಯ ಆಯುಕ್ತರು (ಮೈಸೂರು ವಿಭಾಗ) ಇವರು ಮುಖ್ಯ ಅತಿಥಿಗಳಾಗಿದ್ದರು.

## ಹಾಸನ ಜಿಲ್ಲೆ

ದಿನಾಂಕ 13.9.2000ರಂದು ಚನ್ನರಾಯಪಟ್ಟಣದಲ್ಲಿ ಉಚಿತ ಆರೋಗ್ಯ ತಪಾಸಣಾ ಶಿಬಿರ ಏರ್ಪಡಿಸಲಾಗಿತ್ತು. ಈ ಸಂದರ್ಭದಲ್ಲಿ ನವೋದಯ ಬಾಲಿಕಾ ಪ್ರೌಢಶಾಲೆಯ 15 ಗೈಡ್‌ಗಳು ವೈದ್ಯರಿಗೆ ಹಾಗೂ ಶಿಬಿರಕ್ಕೆ ಸ್ಮರಣೀಯ ಸೇವೆ ಸಲ್ಲಿಸಿದರು. ಆರೋಗ್ಯ ತಪಾಸಣಾ ಶಿಬಿರವನ್ನು ಚನ್ನರಾಯಪಟ್ಟಣದ ಯುವಕರ ಬಳಗ ಮತ್ತು ಕಾಲ್ಗೇಟ್ ಪಾಮೋಲಿವ್ ಇಂಡಿಯಾ ಸಂಸ್ಥೆಯು ಜಂಟಿಯಾಗಿ ಏರ್ಪಡಿಸಿದ್ದವು. ಶ್ರೀಮತಿ ಎನ್.ಕೆ. ಛಾಯಾ, ಎಲ್.ಟಿ(ಜಿ) ತಮ್ಮ ಗೈಡ್ಸ್‌ಗಳ ಜೊತೆ ಭಾಗವಹಿಸಿದ್ದರು.

### ಮಾಹಿತಿ ಶಿಬಿರ

ದಿನಾಂಕ 14.9.2000 ಆಲೂರು ತಾಲ್ಲೋಕು ಹಿರಿಯ ಪ್ರಾಥಮಿಕ ಶಾಲೆಗಳ ಹಾಗೂ ಪ್ರೌಢಶಾಲೆಗಳ ಮುಖ್ಯೋಪಾಧ್ಯಾಯರಿಗೆ ಸ್ಕೌಟಿಂಗ್-ಗೈಡಿಂಗ್ ಮಾಹಿತಿ ಶಿಬಿರವನ್ನು ಆಲೂರು ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ ಏರ್ಪಡಿಸಲಾಗಿತ್ತು.

ಈ ಶಿಬಿರವು ರಾಜ್ಯ ಸಂಘಟನಾ ಆಯುಕ್ತ (ಸ್ಕೌಟ್ಸ್) ಶ್ರೀ ಕೆ. ತಿಮ್ಮಪ್ಪ ಹಾಗೂ ಕೇಂದ್ರಸ್ಥಾನಿಕ ಆಯುಕ್ತರು ಹಾಗೂ ಹಾಸನ ಜಿಲ್ಲಾ ಸಂಯೋಜಕರು ಶ್ರೀ ಎಂ.ಎ. ಚೆಲ್ಲಯ್ಯ ಇವರ ನೇತೃತ್ವದಲ್ಲಿ ನಡೆಯಿತು.

ಈ ಶಿಬಿರದಲ್ಲಿ ಆಲೂರು ತಾಲ್ಲೋಕಿನಿಂದ 70 ಮುಖ್ಯ ಶಿಕ್ಷಕರುಗಳು ಭಾಗವಹಿಸಿದ್ದರು. ಎನ್.ಕೆ. ಛಾಯಾ, ಎಲ್‌ಟಿ(ಜಿ) ಶ್ರೀ ಎಲ್.ಟಿ ಲೋಕೇಶ್ ಎಎಸ್‌ಓಸಿ(ಎಸ್) ಭಾಗವಹಿಸಿದ್ದರು. ಶ್ರೀ ಕೆ.ಎ. ಉಮೇಶ್, ಡಿ.ಎನ್. ಮಂಜುನಾಥ್, ಜವರಯ್ಯ ಶ್ರೀಮತಿ ಕೆ.ಕೆ. ಲೀಲಾ ಎಎಸ್‌ಓಸಿ(ಜಿ) ಇವರುಗಳು ಸಂಪನ್ಮೂಲ ವ್ಯಕ್ತಿಗಳಾಗಿದ್ದರು. ಆಲೂರು ತಾಲ್ಲೋಕು ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಕೆ.ಸಿ. ಕೃಷ್ಣಶೆಟ್ಟಿ ಕೆಎಎಸ್ ಇವರು ಮಾರ್ಗದರ್ಶನ ನೀಡಿ ಕಾರ್ಯಕ್ರಮ ಯಶಸ್ವಿಗೊಳಿಸಿದರು.

14.9.2000ದಂದು ಮಧ್ಯಾಹ್ನ 2.30ಕ್ಕೆ ಆಲೂರು ತಾಲ್ಲೋಕು ತಹಶೀಲ್ದಾರ್‌ರವರಾದ ಶ್ರೀ ಜಗನ್ನಾಥರವರ ಅಧ್ಯಕ್ಷತೆಯಲ್ಲಿ ಸ್ಥಳೀಯ ಸಂಸ್ಥೆ ರಚನೆ ಮಾಡಲಾಯಿತು. ಅಧ್ಯಕ್ಷರಾಗಿ, ಶ್ರೀ ಜಗನ್ನಾಥ್, ತಾಲ್ಲೋಕ್ ತಹಶೀಲ್ದಾರ ಆಲೂರು ಇವರನ್ನು ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ಕೆ.ಸಿ. ಕೃಷ್ಣಶೆಟ್ಟಿ, ಕ್ಷೇತ್ರ ಶಿಕ್ಷಣಾಧಿಕಾರಿ, ಶ್ರೀಮತಿ ಭಾಗ್ಯ, ಜಿ.ಪಂ. ಸದಸ್ಯೆ, ಶ್ರೀ ಎಂ.ಪಿ. ಹರೀಶ್ ಹಾಗೂ ತಾಲ್ಲೂಕು ಕಾರ್ಯ ನಿರ್ವಾಹಕ ಅಧಿಕಾರಿ ಇವರುಗಳನ್ನು ಉಪಾಧ್ಯಕ್ಷರನ್ನಾಗಿ ಆಯ್ಕೆ ಮಾಡಲಾಯಿತು. ತಾಲ್ಲೋಕು ಸ್ಥಳೀಯ ಸಂಸ್ಥೆ ಕಾರ್ಯಕಾರಿ ಸಮಿತಿ ಅಧ್ಯಕ್ಷರಾಗಿ ಶ್ರೀ ಕೆ.ಸಿ. ಕೃಷ್ಣಶೆಟ್ಟಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು ಆಲೂರು ಇವರನ್ನು ನೇಮಿಸಲಾಯಿತು. ಕಾರ್ಯದರ್ಶಿಯಾಗಿ ಶ್ರೀ ಶಶಿಧರ, ಸ್ಕೌಟರ್, ಸಹಕಾರ್ಯದರ್ಶಿಯಾಗಿ ಕೃಷ್ಣಶೆಟ್ಟಿ, ಖಜಾಂಚಿಯಾಗಿ ವೇದಮೂರ್ತಿ ಆಯ್ಕೆಯಾದರು. ಶ್ರೀಮತಿ ರೋಜಲೀನ್, ಫ್ಲಾಕ್ ಲೀಡರ್ ಅವರನ್ನು ಜಂಟಿಕಾರ್ಯದರ್ಶಿಯಾಗಿ ನೇಮಿಸಲಾಯಿತು. ಶ್ರೀ ಕೆ. ತಿಮ್ಮಪ್ಪ, ಶ್ರೀ ಎಂ.ಎ. ಚಲ್ಲಯ್ಯ ಉಪಸ್ಥಿತರಿದ್ದರು. ಜಿಲ್ಲಾ ಆಯುಕ್ತರಾದ ಶ್ರೀ ಯು.ಎನ್. ಪರಮೇಶ್ವರ ಹಿತವಚನ ನೀಡಿದರು.

ಜಿಲ್ಲಾ ಕಾರ್ಯದರ್ಶಿ ಎ.ವಿ. ರಮೇಶ್ ಉಪಸ್ಥಿತರಿದ್ದು ಈ ರಚನಾ ಸಭೆಯಲ್ಲಿ ಜಿಲ್ಲಾ ಸಂಸ್ಥೆಯಿಂದ 500 ರೂಗಳನ್ನು ಆಲೂರು ಸ್ಥಳೀಯ ಸಂಸ್ಥೆಗೆ ನೀಡುವುದಾಗಿ ತಿಳಿಸಿದರು. ಜಿಲ್ಲಾ ಸಂಸ್ಥೆಯ ಎಲ್ಲ ಪದಾಧಿಕಾರಿಗಳು ಉಪಸ್ಥಿತರಿದ್ದು ಈ ಕಾರ್ಯಕ್ರಮವನ್ನು ಯಶಸ್ವಿಗೊಳಿಸಿದರು.

## ಚಿತ್ರದುರ್ಗ ಜಿಲ್ಲೆ

ಇತ್ತೀಚೆಗೆ ಚಿತ್ರದುರ್ಗ ಗುರು ಭವನದಲ್ಲಿ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಶಿಕ್ಷಕ/ಶಿಕ್ಷಕಿಯರ ಸಮ್ಮೇಳನ ನಡೆಯಿತು. ಈ ಸಂದರ್ಭದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಅಧ್ಯಕ್ಷರು ಹಾಗೂ ಜಿಲ್ಲಾಧಿಕಾರಿಗಳೂ ಆದ ಶ್ರೀ ಹೆಗಡೆಯವರು ಮಾತನಾಡಿ ಗ್ರಾಮಾಂತರ ಪ್ರದೇಶಗಳಲ್ಲಿ ಸ್ಕೌಟ್ ಮತ್ತು ಗೈಡ್ ಚಟುವಟಿಕೆಗಳನ್ನು ನಡೆಸಲು ಸಕಲ ಸಹಾಯ ಮತ್ತು ಸಹಕಾರ ನೀಡುವುದಾಗಿ ನುಡಿದರು. ಈ ಸಮ್ಮೇಳನದಲ್ಲಿ ಶ್ರೀ ಅಲೋಕ್‌ನಾಥ್, ಜಿಲ್ಲಾ ದಂಡಾಧಿಕಾರಿಗಳು ಭಾಗವಹಿಸಿ ಮಾತನಾಡುತ್ತಾ, ತನ್ನ ಬಾಲ್ಯ ಕಾಲದಲ್ಲಿ ಸ್ಕೌಟ್ ಚಟುವಟಿಕೆಗಳಲ್ಲಿ ಭಾಗವಹಿಸಿದ್ದನ್ನು ಸ್ಮರಿಸಿದರು. ಈ ಸಮ್ಮೇಳನದಲ್ಲಿ 124 ಶಿಕ್ಷಕ/ಶಿಕ್ಷಕಿಯರು ಭಾಗವಹಿಸಿದ್ದರು ಇದರ ನಾಯಕತ್ವವನ್ನು ಶ್ರೀ ಜಿ.ಎಸ್. ಚಂದ್ರ ಪ್ರಕಾಶ್ ಎ.ಎಲ್.ಟಿ.(ಸ್ಕೌಟ್ಸ್) ಅವರು ವಹಿಸಿದರು.

### ಸಂಕ್ಷಿಪ್ತ ಸುದ್ದಿ

**ಕೋಲಾರದ ಸರಕಾರಿ ಜೂನಿಯರ್ ಕಾಲೇಜ್ ಆವರಣದಲ್ಲಿ, ನವೆಂಬರ್ 2 ರಿಂದ 6, 2000 ರವರೆಗೆ ರಾಜ್ಯಮಟ್ಟದ 24ನೇ ಕಬ್ ಮತ್ತು ಬುಲ್‌ಬುಲ್ ಉತ್ಸವ ಏರ್ಪಡಿಸಲಾಗಿದೆ. ಇದರಲ್ಲಿ ಕರ್ನಾಟಕ ರಾಜ್ಯ ಹಾಗೂ ನೆರೆ ರಾಜ್ಯಗಳಿಂದ 1000 ಕಬ್ಸ್ ಮತ್ತು ಬುಲ್‌ಬುಲ್ಸ್ ಭಾಗವಹಿಸುವರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕೋಲಾರ ಉತ್ತರ ಜಿಲ್ಲೆ ಆತಿಥ್ಯ ನೀಡಲಿದೆ. ಶ್ರೀ ಜಮೀರ್ ಪಾಷ, ಜಿಲ್ಲಾಧಿಕಾರಿಗಳು ಕೋಲಾರ ಹಾಗೂ ಜಿಲ್ಲಾ ಸಂಸ್ಥೆಯ ಅಧ್ಯಕ್ಷರು, ಇವರ ನೇತೃತ್ವದಲ್ಲಿ ಈ ಕಾರ್ಯಕ್ರಮ ನಡೆಯಲಿದೆ.**

## 53ನೆಯ ಸ್ವಾತಂತ್ರ್ಯ ದಿನಾಚರಣೆ

ಬೆಂಗಳೂರು ಫೀಲ್ಡ್ ಮಾರ್ಷಲ್ ಮಾನಿಕ್ಷಾ ಮೈದಾನದಲ್ಲಿ ನಡೆದ ಸಮಾರಂಭ ಮತ್ತು ಪೇರೇಡ್‌ನಲ್ಲಿ ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ಪರವಾಗಿ ಒಂದು ರೋವರ್ಸ್ ತಂಡ ಭಾಗವಹಿಸಿತ್ತು ಇದೇ ಸಮಾರಂಭದಲ್ಲಿ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ ಅವರು ಭಾಗವಹಿಸಿ ಧ್ವಜಾರೋಹಣ ಮಾಡಿ ಎನ್.ಸಿ.ಸಿ. ಆರಕ್ಷಕದಳ, ಭೂಸೇನೆ, ವಾಯುಸೇನೆ ಜೊತೆಯಲ್ಲಿ ರೋವರ್ಸ್ ಮಾರ್ಚ್‌ಫಾಸ್ಟ್‌ನ್ನು ವೀಕ್ಷಿಸಿದರು.

### ಕೇಂದ್ರ ಕಛೇರಿಯಲ್ಲಿ ಧ್ವಜಾರೋಹಣ

53ನೇ ಸ್ವಾತಂತ್ರ್ಯ ದಿನಾಚರಣೆ ಸಂದರ್ಭದಲ್ಲಿ ರಾಜ್ಯ ಪ್ರಧಾನ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಧ್ವಜಾರೋಹಣ ಮಾಡಿ ನೆರೆದಿದ್ದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳನ್ನು ಉದ್ದೇಶಿಸಿ ಮಾತನಾಡಿದರು. ಈ ಸಮಾರಂಭದಲ್ಲಿ ಹಿರಿಯರಾದ ಮೇಜರ್ ಎಂ.ಆರ್. ನಾರಾಯಣ್ ಸಿಂಗ್, ಉಪಾಧ್ಯಕ್ಷರು ಶ್ರೀ ಟಿ.ಎಸ್. ಲೂಕಾಸ್, ರಾಜ್ಯ ಕಾರ್ಯದರ್ಶಿ ಮತ್ತು ರಾಜ್ಯ ಸಂಸ್ಥೆಯ ಇತರ ಪದಾಧಿಕಾರಿಗಳು ಉಪಸ್ಥಿತರಿದ್ದರು.

### ಜಿಲ್ಲಾ ಮಟ್ಟದಲ್ಲಿ ಸ್ವಾತಂತ್ರ್ಯೋತ್ಸವ

ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾಡಳಿತ ವತಿಯಿಂದ ಏರ್ಪಡಿಸಿದ್ದ ಸಾರ್ವಜನಿಕ ಸ್ವಾತಂತ್ರ್ಯೋತ್ಸವ ಸಭೆಗಳಲ್ಲಿ ಆಯಾ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿರುತ್ತಾರೆ.

## NATIONAL AWARD CONFERRED TO CHIEF MINISTER

The Bharat Scouts and Guides, India, New Delhi has conferred its highest National Award the **"Silver Elephant"** to

1. **Sri S.M. Krishna,**
   Chief Minister of Karnataka,
2. **Sri Anantha Kumar**,
   Union Minister for Culture and Tourism
3. **Sri I.A. Kairanna**
   District commissioner (Scouts) D.K.
4. **Smt Vasanthi bai Jigajinni**
   Asst. State Commissioners (Guides) Bijapur.

***OTHER NATIONAL AWARDS :***

***Bar-to-silver star*** : Sri M.M. Londe, LT(S) Former Headquarters Commissioner, Dharwar.

***Silver Star*** :

1. **Smt. Geetha Nataraj**
   Joint State Secretary (Guides)
2. **Sri K. Thimmaiah**
   District Commissioner (Scouts) Raichur.

The Awards will be presented by His Excellency the President of India during the Rastrapathi Scouts & Guides Rally to be held in November 2000 at New Delhi.

## *Karnataka Secured Four Prizes In II National Level Essay Competition*

Four Prizes in the II National Level Essay Competition held on the occasion of the celebration of National Youth Day will be presented to winners at the National Council Meeting on 26.11.2000 at New Delhi,

Subject given was "Swami Vivekananda" and the winners are :

***1. Meghana N. Hebbar*** (BulBul) Mangalore, Dakshina Kannada Dist. **First Place**, ***2. Arpith. I*** (cub) Mangalore, Dakshina Kannada Dist - **Second Place**, ***3. A.R. Rakshak*** (Scout) Davanagere Dist - **Second Place**, ***4. P. Mona Menez*** (Ranger) Bhadravathi-Shimoga Dist. **Second Place.**

## *43rd World Scout JOTA & JOTI 21.22. October 2000 (Jamboree-on-The Air and Jamboree-on-the-internet)*

The largest annual events of the world organisation of the Scout movement, the Jamboree-on-the Air (Jota) & Jamboree on the internet (JOTI) will be held from 21st and 22nd October 2000.

What is the Jamboree-on-the Air?

The JOTA is an annual event in which about 500,000 Scouts and Guides all over the world makes contact with each other by means of amateur radio. It is a real Jamboree during which Scouting experience are exchanged and ideas are shared thus contributing to the world brotherhood of Scouting. The JOTA is a world wide event. Units may operate for 48 hours or any part thereof.


**ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರ**

ಸಲಹೆಗಾರರು : ಗೊ.ರು. ಚನ್ನಬಸಪ್ಪ

ಸಂಪಾದಕರು : ಟಿ.ಎಸ್. ಲೂಕಾಸ್

ಸದಸ್ಯರು : ಚನ್ನಸ್ವಾಮಿ ರೆಡ್ಡಿ
ಗೀತಾ ನಟರಾಜ್
ಹೆಗಡೆ ಹಲಸಿಗೆ

ಸಹ ಸಂಪಾದಕರು : ಎಂ. ಎ. ಚೆಲ್ಲಯ್ಯ
ಎನ್. ಶ್ರೀನಿವಾಸನ್